ಕುರ್ಯಾದ್ಭಾರ್ಗವ ಸರ್ವತ್ರ ಹೋಮಜಪ್ಯೈರ್ಯಥೇಪ್ಸಿತಂ ।
ಶಿವಸಂಕಲ್ಪಜಪ್ಯೇನ ಸಮಾಧಿಂ ಮನಸೋ ಲಭೇತ್ ॥ ೧೩೫ ॥

ಪಂಚನದ್ಯ ಇತ್ಯನೇನ ಪದ್ಮಲಕ್ಷಂ ಘೃತಾಪ್ಲುತಂ ।
ಹುತ್ವಾ ಶೀಘ್ರಮವಾಪ್ನೋತಿ ಶ್ರಿಯಂ ವೈ ಪದ್ಮಮಾಲಿನೀಂ ॥ ೧೩೬ ॥

ಉಭಾವಪೀತ ಇತ್ಯೇತದ್ರೂಪಕಾಮಸ್ಯ ಶಸ್ಯತೇ ।
ಯದಾಬಧ್ನನ್ದಾಕ್ಷಾಯಣಾ ಮಂತ್ರೇಣಾನೇನ ಮಂತ್ರಿತಂ ॥ ೧೩೭ ॥

ಸಹಸ್ರಕೃತ್ವಃ ಕನಕಂ ಧಾರಯೇದ್ರಿಪುನಾಶನಂ ।
ಗುಹ್ಯಕಾನಾಂ ಚ ಸರ್ವೇಷಾಂ ತಥಾ ನಿರ್ವಹಣಂ ಪರಂ ॥ ೧೩೮ ॥

ಇಮಂ ಜೀವೇಭ್ಯ ಇತಿ ಚ ಸೀತಾಲೋಷ್ಟಂ ಚತುರ್ದಿಶಂ ।
ಕ್ಷಿಪೇದ್ಗೃಹೇ ತದಾ ತಸ್ಯ ನ ಸ್ಯಾಚ್ಚೋರಭಯಂ ನಿಶಿ ॥ ೧೩೯ ॥

---

ಸಂದರ್ಭಗಳಲ್ಲೂ ತನಗೆ ಅಭಿಮತವಾದ ಹೋಮ, ಜಪ ಇತ್ಯಾದಿಗಳಿಂದ ದೇವತಾ ಪೂಜೆಯನ್ನು ನಡೆಸಬೇಕು. ಶಿವಸಂಕಲ್ಪದ ಜಪದಿಂದ ಯೋಗಸಾಧನೆಗೆ ಬೇಕಾದ ಮನೋದಾರ್ಢ್ಯವನ್ನು ಹೊಂದುತ್ತಾನೆ.

೧೩೬–೧೩೭. ಪಂಚನದ್ಯಃ ಎಂಬ ಮಂತ್ರದಿಂದ ಆಜ್ಯದಲ್ಲಿ ನೆನೆಸಿದ ಒಂದು ಲಕ್ಷ ಪದ್ಮವನ್ನು ಹೋಮಮಾಡಿದವನು ಪದ್ಮಮಾಲಿಕೆಯುಳ್ಳ ಲಕ್ಷ್ಮಿಯನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಉಭಾವಪೀತಾ ಎಂಬ ಮಂತ್ರವು ಸುರೂಪವನ್ನು ಅಪೇಕ್ಷಿಸುವವನಿಗೆ ಪ್ರಶಸ್ತವಾದುದು. ಯದಾಬಧ್ನರ್ ದಾಕ್ಷಾಯಣಾ ಎಂಬ ಈ ಮಂತ್ರದಿಂದ ಸಾವಿರಸಲ ಮಂತ್ರಿಸಲ್ಪಟ್ಟ,

೧೩೮–೧೩೯. ಚಿನ್ನವನ್ನು ಧರಿಸಿದಲ್ಲಿ ಅದು ಸರ್ವಶತ್ರುನಾಶಕವಾಗುತ್ತದೆ. ಇದು ಎಲ್ಲಾ ಗುಹ್ಯಕರ ಉತ್ತಮ ವ್ಯವಹಾರವೇ ಆಗಿದೆ. ಇಮಂಜೀವೇಭ್ಯಃ ಎಂಬ ಮಂತ್ರದಿಂದ ನೇಗಿಲಿನಿಂದ ಎದ್ದ ಮಣ್ಣಿನ ಹೆಂಟೆಯನ್ನು ನಾಲ್ಕು ದಿಕ್ಕುಗಳಿಗೂ ಎಸೆಯಬೇಕು. ಹೀಗೆ ಮಾಡಿದಲ್ಲಿ ಆಗ ಮನೆಯಲ್ಲಿ ರಾತ್ರಿಯಕಾಲದಲ್ಲಿ ಕಳ್ಳರ ಭಯವಿರುವುದಿಲ್ಲ.

ಪರೀಮೆಗಾಮನೇಷತೇತಿ ವಶೀಕರಣಮುತ್ತಮಂ ।
ಹರ್ತುಮಪ್ಯಾಗತಸ್ತಸ್ಯ ವಶೀಭವತಿ ಮಾನವಃ　　॥ ೧೪೦ ॥

ಭಕ್ಷ್ಯತಾಂಬೂಲಪುಷ್ಪಾದ್ಯಂ ಮಂತ್ರಿತಂ ತು ಪ್ರಯಚ್ಛತಿ ।
ಯಸ್ಯ ಧರ್ಮಸ್ಯ ವಶಗಃ ಸೋಽಸ್ಯ ಶೀಘ್ರಂ ಭವಿಷ್ಯತಿ　　॥ ೧೪೧ ॥

ಶನ್ನೋಮಿತಿ ತೆ ಇತ್ಯೇತತ್ಸದಾ ಸರ್ವತ್ರ ಶಾಂತಿದಂ ।
ಮನಸಃ ಕಾಮಮಾಕೂತಿಃ ಪುಷ್ಟಿಕಾಮಸ್ಯ ಶಸ್ಯತೇ　　॥ ೧೪೨ ॥

ಚಮಷಟ್ಕಂ ಚ ಧರ್ಮಜ್ಞ ಸರ್ವಕಾಮಕರಂ ಸ್ಮೃತಂ ।
ಷಟ್ಕೇನ ಚ ತಥಾ ಹೋಮಃ ಸರ್ವದೇವಪ್ರಸಾದನಃ　　॥ ೧೪೩ ॥

ಔದಾರ್ಯೇಣೋದಕಂ ಸ್ಪೃಷ್ಟ್ವಾ ತದ್ದೋಷಾದ್ವಿಪ್ರಮುಚ್ಯತೇ ।
ವಿವೃತಂ ಚೈತದಾಜ್ಯೇನ ಹುತಂ ಶೂಲಾಸಹಂ ಭವೇತ್　　॥ ೧೪೪ ॥

---

೧೪೦–೧೪೨. ಪರೀಮೆಗಾಮನೇಷತ ಎಂಬ ಮಂತ್ರವು ಉತ್ತಮವಾದ ವಶೀಕರಣ ಸಾಧನ ಕಳವು ಮಾಡಲು ಬಂದವನೂ ಸಹ ಈ ಮಂತ್ರದಿಂದ ವಶನಾಗುತ್ತಾನೆ. ಯಾವ ಯಾವ ಧರ್ಮಗಳಲ್ಲಿ ಅವನು ವಶನಾಗಬೇಕೋ ಆ ಸಮಯದಲ್ಲಿ ಭಕ್ಷ್ಯಗಳು ತಾಂಬೂಲ, ಪುಷ್ಪಗಳು ಇವನ್ನು ಅಭಿಮಂತ್ರಿಸಿ ಕೊಟ್ಟಲ್ಲಿ ಅವನುಜಾಗ್ರತೆಯಾಗಿ ವಶನಾಗುತ್ತಾನೆ. ಶನ್ನೋಮಿತಿ ಎಂಬ ಮಂತ್ರವು ಎಲ್ಲಾ ಸಂದರ್ಭದಲ್ಲಿಯೂ ಶಾಂತಿಪ್ರದವಾಗಿರುತ್ತದೆ. ಮನಸಃ ಕಾಮಮಾಕೂತಿಃ ಎಂಬ ಮಂತ್ರವು ಪುಷ್ಟಿಯನ್ನು ಅಪೇಕ್ಷಿಸುವವನಿಗೆ ಪ್ರಶಸ್ತವಾದುದು.

೧೪೩–೧೪೪. ಚಮೆ ಎಂಬ ಆರು ಮಂತ್ರಗಳು ಎಲ್ಲಾ ಮನೋರಥ ಸಿದ್ಧಿಗೂ ಸಾಧನವಾಗುತ್ತವೆ. ಎಂದು ಹೇಳಲಾಗಿದೆ. ಅದರ ಮಂತ್ರಗಳಿಂದ ಹೋಮಮಾಡಿದಲ್ಲಿ ಎಲ್ಲಾ ದೇವತೆಗಳ ಅನುಗ್ರಹವೂ ಉಂಟಾಗುತ್ತದೆ. ಔದಾರ್ಯೇಣ ಎಂಬ ಮಂತ್ರದಿಂದ ಜಲವನ್ನು ಸ್ಪರ್ಶಮಾಡಿದಲ್ಲಿ ಜಲದ ದೋಷದಿಂದ ಮುಕ್ತನಾಗುತ್ತಾನೆ. ವಿವೃತಂಚ ಎಂಬ ಮಂತ್ರದಿಂದ ಮಾಡಿದ ಹೋಮವು ಉದರ ಬಾಧೆಗೆ ನಾಶಕವಾಗುತ್ತದೆ.

ಗಣಾನಾಂ ತ್ವಾ ಗಣಪತಿಂ ಹೋಮಂ ಕೃತ್ವಾ ಚತುಷ್ಪಥೇ ।
ವಶೀಕುರ್ಯಾಜ್ಜಗತ್ಸರ್ವಂ ಸರ್ವಧಾನ್ಯೈರಸಂಶಯಂ ॥ ೧೪೫ ॥

ವೈಕಂಕತೇಧ್ಮಹೋಮೇ ಚ ಸಮಾಸ್ತ್ವಾಗ್ನ ಇತೀತ್ಯಪಿ ।
ಯಶಸಾ ಯೋಗಮಾಪ್ನೋತಿ ವಿಪುಲಂ ನಾತ್ರ ಸಂಶಯಃ ॥ ೧೪೬ ॥

ಅಗ್ನಿರ್ಮೂರ್ಧೇತಿ ಮಂತ್ರೇಣ ಹುತ್ವೈವಾಜ್ಯಂ ಹುತಾಶನೇ ।
ತತ್ಪ್ರಸಾದಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥ ೧೪೭ ॥

ಏವಂ ಹಿ ದೇವತಾಲಿಂಗೈಸ್ತಥಾ ರಾಮ ಯಥಾ ಸ್ವಕೈಃ ।
ಹುತೈಃ ಪ್ರಸಾದಯೇದಿಷ್ಟಾಂ ದೇವತಾಂ ನಾತ್ರ ಸಂಶಯಃ ॥ ೧೪೮ ॥

ಹಿರಣ್ಯವರ್ಣಾಃ ಶುಚಯೋ ಮಂತ್ರೋಯಮಭಿಷೇಚನೇ ।
ಶನ್ನ ಆಪಶ್ಚ ಧನ್ವನ್ಯಾಃ ಸರ್ವಪಾಪಹರಾಃ ಸ್ಮೃತಾಃ ॥ ೧೪೯ ॥

---

೧೪೫-೧೪೬. ಗಣಾನಾಂ ತ್ವಾ ಗಣಪತಿಂ ಎಂಬ ಮಂತ್ರದಿಂದ ನಾಲ್ಕು ಬೀದಿಯ ಮಧ್ಯದಲ್ಲಿ ಹೋಮಮಾಡಿದಲ್ಲಿ ಅವನು ಎಲ್ಲಾ ಧಾನ್ಯಗಳಿಂದಲೂ ಎಲ್ಲಾ ಜಗತ್ತನ್ನೂ ವಶಪಡಿಸಿಕೊಳ್ಳುತ್ತಾನೆ. ಇದರಲ್ಲಿ ಸಂದೇಹವಿಲ್ಲ. ವಾಪ್ರುಪಾತ್ (ಹುಳಿಬೇಲ) ಎಂಬ ಮರದ ಸಮಿತ್ತುಗಳಿಂದ ಸಮಾಸ್ತ್ವಾಗ್ನೇ ಎಂಬ ಮಂತ್ರದಿಂದ ಹೋಮಮಾಡಿದವನು ಅಪರಿಮಿತವಾದ ಯಶಸ್ಸಿಗೆ ಭಾಗಿಯಾಗುತ್ತಾನೆ. ಇದರಲ್ಲಿ ಸಂದೇಹವಿಲ್ಲ.

೧೪೭-೧೪೮. ಅಗ್ನಿರ್ಮೂರ್ಧಾ ಎಂಬ ಮಂತ್ರದಿಂದ ಅಗ್ನಿಯಲ್ಲಿ ಆಜ್ಯ ಹೋಮ ಮಾಡಿದವನು ಆ ಅಗ್ನಿಯ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಹೀಗೆಯೇ ಆಯಾಯ ದೇವತೆಗಳ ಲಿಂಗವಿರುವ ಮಂತ್ರಗಳಿಂದ ಆಯಾಯ ಇಷ್ಟದೇವತೆಗಳನ್ನು ಪೂಜಿಸಿ ದಲ್ಲಿ ಅಂತಹ ದೇವತೆಗಳ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಎಂಬುದರಲ್ಲಿ ಸಂದೇಹವಿಲ್ಲ.

೧೪೯-೧೫೦. ಹಿರಣ್ಯವರ್ಣಾಃ ಶುಚಯಃ ಎಂಬ ಮಂತ್ರವನ್ನು ಅಭಿಷೇಕದಲ್ಲಿ ಉಪಯೋಗಿಸಬೇಕು. ಶನ್ನ ಆಪಶ್ಚ ಧನ್ವನ್ಯಾಃ ಎಂಬ ಮಂತ್ರಗಳು ಸಮಸ್ತ ಪಾಪಗಳಿಗೂ ನಾಶಕಗಳೆಂದು ಹೇಳಲಾಗಿದೆ. ಶನ್ನೋದೇವೀರಭಿಷ್ಟಯೇ ಎಂಬ

ಪ್ರವಾದಸಾಂ ಸೇತಿ ಚೈವಗೃಹೇ ಯಜ್ಞೋ ವಿಧೀಯತೇ ।
ದೇವೇಭ್ಯೋ ವನಸ್ಪತೇ ಇತಿ ಬ್ರಹ್ಮಯಜ್ಞೋವಿಧೀಯತೇ ॥ ೧೫೫ ॥

ರಾತ್ರೀಯಕ್ಯ ಇತಿ ದ್ವಾಭ್ಯಾಂ ರಾತ್ರಿಯಜ್ಞಾಃ ಪ್ರಕೀರ್ತಿತಾಃ ।
ಶಮೀ ಶಮೀಕಂ ಶಮ್ಯಾಕಾಮಶ್ವತ್ಥಂ ಪ್ಲಕ್ಷಮೇವ ಚ ॥ ೧೫೬ ॥

ಉದುಂಬರಂ ಚ ನ್ಯಗ್ರೋಧಮಪಾಮಾರ್ಗಂ ಚ ಗೋಮಯಂ ।
ಯಾಂ ಕುರ್ಯಾದ್ದರ್ಭಪಿಂಜೂಲಾಂ ದೂರ್ವಾಂ ಪ್ರಾಚೀನಗಾಮಿನೀಂ ॥

ಸೀತಾಂ ಲೋಷ್ಟಂ ಸುವರ್ಣಂ ಚ ತಥಾ ವಲ್ಮೀಕಮೃತ್ತಿಕಾಂ ।
ಸಂ ವಃ ಸೃಜಾಮೀತಿ ದ್ವಾಭ್ಯಾಂ ಬೀಜಾನ್ಯಪ್ಸು ವಿನಿಕ್ಷಿಪೇತ್ ॥ ೧೫೮ ॥

ಯಾ ಓಷಧಯ ಇತ್ಯೇತದನುವಾಕಂ ತತೋ ಜಪೇತ್ ।
ಅಪಾಮಿವೋದ್ವಿತಿ ತತಃ ಪ್ರೋಕ್ಷಣಂ ತು ವಿಧೀಯತೇ ॥ ೧೫೯ ॥

ಇನ್ನೋ ಭಯಮಿತೀತ್ಯೇತಚ್ಚಾಷ್ಟರ್ಚಂ ಜುಹುಯಾದ್ದ್ವಿಜಃ ।
ಯದ್ದೇವಾದೇವಹೇಡನಮೃಚಸ್ತಿಸ್ರಃ ತಥೈವ ಚ ॥ ೧೬೦ ॥

---

ರಾತ್ರೀಯಕ್ಯ ಎಂಬ ಎರಡು ಮಂತ್ರಗಳಿಂದ ರಾತ್ರಿಯಲ್ಲಿ ನಡೆಸಲ್ಪಡುವ ಯಜ್ಞಗಳು ಹೇಳಲ್ಪಟ್ಟಿವೆ.

೧೫೬–೧೫೮. ಶಮೀ ಶಮೀಕಂ ಎಂಬ ಮಂತ್ರದಿಂದ ರಾಜವೃಕ್ಷ, ಅಶ್ವತ್ಥ, ಫಣಿಯಾಲ, ಅತ್ತಿ, ಆಲ, ಉತ್ತರಣಿ ಮತ್ತು ಗೋಮಯ ಇವುಗಳನ್ನೂ ಯಾಂ ಕುರ್ಯಾದ್ದರ್ಭಪಿಂ ಜೂಲಾಂ ಎಂಬ ಮಂತ್ರದಿಂದ ಗರಿಕೆ, ಅಗಳುಶುಂಠಿ ನೇಗಿಲಿನಿಂದ ಉತ್ತ ಮಣ್ಣುಹೆಂಟೆ, ಸುವರ್ಣ, ಹುತ್ತದ ಮಣ್ಣು ಇವನ್ನು ತೆಗೆದುಕೊಂಡು ಸಂ ವಃ ಸೃಜಾಮಿ ಎಂಬ ಎರಡು ಮಂತ್ರಗಳಿಂದ ಈ ಬೀಜಗಳನ್ನು ನೀರಿನಲ್ಲಿ ಹಾಕಬೇಕು.

೧೫೯–೧೬೦. ಯಾ ಓಷಧಯಃ ಎಂಬ ಅನುವಾಕವನ್ನು ಅನಂತರ ಜಪಿಸಬೇಕು. ಅಪಾಮಿವೋದ್ವಿ ಎಂಬ ಮಂತ್ರದಿಂದ ಪ್ರೋಕ್ಷಣಮಾಡಬೇಕು. ಇನ್ನೋ ಭಯಂ ಎಂಬ ಎಂಟು ಋಕ್ಕುಗಳಿಂದ ದ್ವಿಜನಾದವನು ಹೋಮಮಾಡಬೇಕು. ಯದ್ದೇವಾದೇವಹೇಡನಂ ಎಂಬ ಮೂರು ಋಕ್ಕುಗಳಿಂದಲೂ ಹೋಮಮಾಡಿ ಸಂಪ್ರೋಕ್ಷಣವನ್ನು ಮಾಡಬೇಕು.

ಶನ್ನೋದೇವೀರಭಿಷ್ಟಯೇ ಚೇತಿಶಾಂತಿಕರಃ ಪರಃ ।
ಏಕಚಕ್ರೇತಿ ಮಂತ್ರೇಣ ಹುತೇನಾಜ್ಯೇನ ಭಾರ್ಗವ ॥ ೧೫೦ ॥

ಗ್ರಹೇಭ್ಯಃ ಶೀಘ್ರಮಾಪ್ನೋತಿ ಪ್ರಸಾದಂ ನಾತ್ರ ಸಂಶಯಃ ।
ಯಾಜ್ಯಾನುವಾಕೌ ವೃಕ್ಷಾಣಾಂ ಸಮಾಗ್ರೇವರ್ಚ ಇತ್ಯಪಿ ॥ ೧೫೧ ॥

ತತ್ಪ್ರಸಾದಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಗಾವೋಭಗ ಇತಿ ದ್ವಾಭ್ಯಾಂ ಹುತ್ವೈವಾಜ್ಯಂ ಸಹಸ್ರಶಃ ॥ ೧೫೨ ॥

ಗಾಃ ಸಮಾಪ್ನೋತಿ ಧರ್ಮಜ್ಞ ನಾತ್ರ ಕಾರ್ಯಾ ವಿಚಾರಣಾ ।
ಉದುತ್ತಮಂ ವರುಣ ಇತಿ ಜುಹುಯಾದ್ಭೃಗುನಂದನ ॥ ೧೫೩ ॥

ನದೀವಾಹತಟಾಕೇಷು ಸುಕೃತೇಷು ದ್ವಿಜೋತ್ತಮ ।
ಸಂವದತ್ತ್ವಾಂ ಹಿರಣ್ಯಕೋಶಂ ರೂಪಂ ಕೃತ್ವಾ ತಥೈವ ಚ ॥ ೧೫೪ ॥

---

ಮಂತ್ರವು ಶಾಂತಿಪ್ರದವೆಂದು ಹೇಳಲ್ಪಟ್ಟಿದೆ. ಏಕಚಕ್ರ ಎಂಬ ಮಂತ್ರದಿಂದ ಆಜ್ಯ ಹೋಮವನ್ನು ಮಾಡಿದಲ್ಲಿ ಅವನು ಗ್ರಹಗಳ ಅನುಗ್ರಹವನ್ನು ಜಾಗ್ರತೆಯಾಗಿ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೫೧-೧೫೩. ಯಾಜ್ಯಾನುವಾಕಗಳೂ ಆಗಿರುವ ಸಮಾಗ್ನೇ ವರ್ಚಃ ಎಂಬ ಮಂತ್ರವನ್ನು ಮರಗಳ ವಿಷಯದಲ್ಲಿ ಪ್ರಯೋಗಿಸಿದವನು ಅವುಗಳ ಅನುಗ್ರಹವನ್ನು ಹೊಂದುತ್ತಾನೆ. ಗಾವೋಭಗಃ ಎಂಬ ಎರಡು ಮಂತ್ರಗಳಿಂದಲೂ ಸಾವಿರ ಸಲ ಆಜ್ಯಹೋಮ ಮಾಡಿದವನು ಗೋವುಗಳನ್ನು ಹೊಂದುತ್ತಾನೆ. ಈ ವಿಷಯ ದಲ್ಲಿಯೂ ವಿಚಾರಮಾಡಬೇಕಾದುದಿಲ್ಲ ಉದುತ್ತಮಂ ವರುಣಃ ಎಂಬ ಮಂತ್ರದಿಂದ ನದಿಗಳು ಹೋಗಿ ಸೇರುವ ಅಥವಾ ನದಿಗಳನ್ನು ಉತ್ಪತ್ತಿಮಾಡುವ ಪುಣ್ಯಕರವಾದ ಮಹಾತಟಾಕಗಳಲ್ಲಿ ಹೋಮಮಾಡಬೇಕು.

೧೫೪-೧೫೫. ಸಂವದತ್ತ್ವಾಂ, ಹಿರಣ್ಯಕೋಶಂ, ರೂಪಂ ಕೃತ್ವಾ ಪ್ರವಾದಸಾಂಸಾ ಎಂಬ ಮಂತ್ರಗಳು ಮನೆಯಲ್ಲಿ ಮಾಡತಕ್ಕ ಯಜ್ಞಗಳಲ್ಲಿ ವಿಧಿಸಲಾಗಿವೆ. ದೇವೇಭ್ಯೋ ವನಸ್ಪತಯಃ ಎಂಬ ಮಂತ್ರವು ಬ್ರಹ್ಮಯಜ್ಞಯಲ್ಲಿ ವಿಧಿಸಲ್ಪಟ್ಟಿವೆ.

ಹುತ್ವಾ ಸಂಪ್ರೋಕ್ಷಣಂ ಕುರ್ಯಾದ್ಬ್ರಾಯುಃ ಸರ್ವತ್ರ ಮಾನವಃ ।
ಸರ್ವೋತ್ಪಾತಪ್ರಶಮನಂ ಕರ್ಮೈತತ್ಪರಿಕೀರ್ತಿತಂ　　॥ ೧೬೧ ॥

ಗಾಯತ್ರೀ ವೈಷ್ಣವೀ ಜ್ಞೇಯಾ ತದ್ವಿಷ್ಣೋಃ ಪರಮಂಪದಂ ।
ಸರ್ವಪಾಪಪ್ರಶಮನೀ ಸರ್ವಕರ್ಮಕರೀ ತಥಾ　　॥ ೧೬೨ ॥

ಏತಾವದುಕ್ತಂ ಯಜುಷಾಂ ವಿಧಾನಂ
ಮಯಾಹಿ ಕಿಂಚಿತ್ತವ ಧರ್ಮನಿಷ್ಠ ।
ಅತಃಪರಂ ವಚ್ಮಿ ನೃವೀರ ಸಾಮ್ನಾಂ
ತನ್ಮೇ ಶೃಣುಷ್ವಾಯತಲೋಹಿತಾಕ್ಷ　　॥ ೧೬೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ
ತಂತ್ರವಿಧಾನಂ ನಾಮ
ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

---

೧೬೧–೧೬೩. ಈ ಕರ್ಮವು ಸಮಸ್ತ ಉತ್ಪಾತಗಳಿಗೂ (ಅಶುಭಶಕುನ) ಪ್ರತೀಕಾರರೂಪವಾಗುತ್ತದೆ. ವೈಷ್ಣವ ಗಾಯತ್ರಿಯು ವಿಷ್ಣುವಿನ ಸಾಕ್ಷಾತ್ಪರಮ ಪದವೇ ಆಗಿದೆ ಅದಕ್ಕೆ ಸಾಧನವೆಂದು ತಾತ್ಪರ್ಯ. ಇದು ಎಲ್ಲಾ ಪಾಪಗಳಿಗೂ ನಾಶಕವಾಗಿಯೂ ಎಲ್ಲಾ ಕರ್ಮಗಳಿಗೂ ಸಾದ್ಗುಣ್ಯಪ್ರದವೂ ಆಗಿರುತ್ತದೆ. ಎಲೈ ಧರ್ಮನಿರತನೇ ಯಜುರ್ವೇದದ ಮಂತ್ರಗಳ ವಿಧಾನವನ್ನು ಸ್ವಲ್ಪಮಟ್ಟಿಗೆ ಇದುವರಿಗೆ ನಿನಗೆ ಹೇಳಿರುವೆನು. ಇನ್ನು ಮುಂದೆ ಸಾಮವೇದದ ವಿಧಾನವನ್ನು ನಿನಗೆ ಹೇಳುತ್ತೇನೆ, ಅದನ್ನೂ ಕೇಳು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರ ದ್ವಿತೀಯ ಖಂಡದಲ್ಲಿ ಮಾರ್ಕಂಡೇಯ
ಸಂವಾದದಲ್ಲಿ ರಾಮನನ್ನು ಕುರಿತು ಪುಷ್ಕರನ ಉಪಾಖ್ಯಾನದಲ್ಲಿ
ತಂತ್ರವಿಧಾನವೆಂಬ ನೂರ ಇಪ್ಪತ್ತೈದನೆಯ
ಅಧ್ಯಾಯವು ಮುಗಿದಿದೆ.



## ನೂರ ಇಪ್ಪತ್ತೈದನೆಯ ಅಧ್ಯಾಯದ ಸಾರಾಂಶ.



ಈ ಅಧ್ಯಾಯದಲ್ಲಿಯೂ ಕ್ರಮಪ್ರಾಪ್ತವಾದ ಯಜುರ್ವೇದದ ಮಂತ್ರಗಳಿ ಆಯಾಯ ಅಭಿಮತ ಕಾರ್ಯಗಳಲ್ಲಿ ವಿನಿಯೋಗ ಕ್ರಮವನ್ನು ವಿಸ್ತಾರವಾ ನಿರೂಪಿಸಿರುವರು.





